ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಗುರುವಾರ, ದಿನಾಂಕ: 18ನೇ ಜುಲೈ, 2019

ಕೆ.ಎಸ್.ಆರ್.ಟಿ.ಸಿ. ಮತ್ತು ಬಿ.ಎಂ.ಟಿ.ಸಿ. ಸಂಸ್ಥೆಗಳು ಸತತ ನಷ್ಟದಲ್ಲಿದ್ದು, ವಿದ್ಯುತ್ ಚಾಲಿತ ಬಸ್ಸುಗಳನ್ನು ಉಪಯೋಗಿಸುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

303 (203) ಮಾನ್ಯ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವಿದೇಶಗಳಲ್ಲಿ ಹಾಗೂ ದೇಶದಲ್ಲಿ ಹಲವಾರು ಕಡೆ ವಿದ್ಯುತ್ ಚಾಲಿತ ಬ್ಯಾಟರಿಗಳ ಮುಖಾಂತರ ನಡೆಯುವ ವಾಹನಗಳನ್ನು ಬಳಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ದುಬಾರಿ ಬೆಲೆಯ ಡೀಸೆಲ್ ಬಳಕೆಗಿಂತ ವಿದ್ಯುತ್ ಚಾಲಿತ ಬ್ಯಾಟರಿ ಬಸ್ಸುಗಳನ್ನು ಖರೀದಿಸುವ ಯೋಜನೆ ಸರ್ಕಾರಕ್ಕಿದೆಯೇ ;

(ಇ) ಈ ತರಹದ ವಿದ್ಯುತ್ ಚಾಲಿತ ಬ್ಯಾಟರಿ ಬಸ್ಸುಗಳನ್ನು ನಿರ್ಮಾಣ ಮಾಡುತ್ತಿರುವ ಕಂಪನಿಗಳ ಹೆಸರೇನು ಹಾಗೂ ಪ್ರತಿ ಬಸ್ಸಿಗೆ ತಗಲುವ ಅಂದಾಜು ವೆಚ್ಚವೆಷ್ಟು ?